DFA/598485

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 460

ಮಾನ್ಯ ಸದಸ್ಯರ ಹೆಸರು : ಶ್ರೀ ಹೆಚ್. ಎಂ. ರಮೇಶ್ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 16.12.2021

ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಎನ್.ಪಿ.ಎಸ್. ಯೋಜನೆಯ ಸಾಧಕ-ಬಾಧಕಗಳ ಬಗ್ಗೆ ಪರಿಶೀಲಿಸಿ ವರದಿ ನೀಡಲು ರಚಿಸಿರುವ ಸಮಿತಿಯು ಕಾಲಕಾಲಕ್ಕೆ ಸಭೆಗಳನ್ನು ನಡೆಸಿದೆಯೇ; ನಡೆಸಿದ್ದಲ್ಲಿ, ಇಲ್ಲಿಯವರೆಗೆ ಎಷ್ಟು ಸಭೆಗಳನ್ನು ನಡೆಸಿದೆ; ಈ ಸಭೆಯಲ್ಲಿ ಕೈಗೊಂಡ ನಿರ್ಣಯಗಳ ಬಗ್ಗೆ ಸರ್ಕಾರಕ್ಕೆ ವರದಿ ನೀಡಿದೆಯೇ; (ಸಂಪೂರ್ಣ ವಿವರ ನೀಡುವುದು) | ಹೌದು.<br><br>ಸಮಿತಿಯು ಇಲ್ಲಿಯವರೆಗೆ ಮೂರು ಸಭೆಗಳನ್ನು ನಡೆಸಿದೆ.<br><br>ಸಮಿತಿಯ ವರದಿಯನ್ನು ನಿರೀಕ್ಷಿಸಲಾಗಿದೆ. |
| ಆ) | 6ನೇ ವೇತನ ಆಯೋಗದ 2ನೇ ಸಂಪುಟದಲ್ಲಿ ಯಾವೆಲ್ಲಾ ವಿಷಯದ ಬಗ್ಗೆ ಶಿಫಾರಸ್ಸು ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | 6ನೇ ರಾಜ್ಯ ವೇತನ ಆಯೋಗವು ತನ್ನ ವರದಿಯ 2ನೇ ಸಂಪುಟದಲ್ಲಿ ಕೆಲವೊಂದು ಇಲಾಖೆಗಳಲ್ಲಿನ ಹುದ್ದೆಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ಶಿಫಾರಸ್ಸುಗಳೂ ಸೇರಿದಂತೆ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯ ಕ್ಷಮತೆಯನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಕೆಲವು ಇಲಾಖೆಗಳ ಮತ್ತು ಹುದ್ದೆಗಳ ವಿಲೀನಾತಿ, ಹೊಸ ವೃಂದಗಳ ಸೃಜನೆ ಮುಂತಾದಂತೆ ಸರ್ಕಾರದ ಇಲಾಖೆಗಳ ಮತ್ತು ಸೇವೆಗಳ ಪುನರ್‌ರಚನೆ, ಸಿಬ್ಬಂದಿ ನೇಮಕಾತಿ ಪ್ರಾಧಿಕಾರದ ಸ್ಥಾಪನೆ, ಹೊಸ ತರಬೇತಿ ಕೇಂದ್ರಗಳ ಸ್ಥಾಪನೆ, ಸರ್ಕಾರಿ ನೌಕರರ ಮತ್ತು ಇಲಾಖೆಗಳ ಉತ್ಪಾದಕತೆಯನ್ನು ಹೆಚ್ಚಿಸಲು ಸಾಮರ್ಥ್ಯ ವೃದ್ಧಿ ಮತ್ತು ಪ್ರೋತ್ಸಾಹಕ ಯೋಜನೆಗಳನ್ನು ಅನುಷ್ಠಾನಗೊಳಿಸುವುದು, ಇಲಾಖೆಗಳ ಕಾರ್ಯಸ್ಥಿತಿ, ಕಾರ್ಯ ವಿಧಾನಗಳು ಇತ್ಯಾದಿಗಳ ಸುಧಾರಣೆ, ಮಾನವ ಸಂಪನ್ಮೂಲದ ನಿರ್ವಹಣೆ ಮುಂತಾದ ಆಡಳಿತ ಸುಧಾರಣಾ ವಿಷಯಗಳ ಬಗ್ಗೆ ಶಿಫಾರಸ್ಸು ಮಾಡಿರುತ್ತದೆ. |
| ಇ) | 2ನೇ ಸಂಪುಟವನ್ನು ಅಧ್ಯಯನ ಮಾಡಲು ರಚಿಸಿರುವ ಅಧಿಕಾರಿಗಳ ಸಮಿತಿಯು ಸಲ್ಲಿಸಿರುವ ಅಧ್ಯಯನ ವರದಿಯ ವಿವರಗಳೇನು; ಈ ವರದಿಯ ಮೇಲೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ವಿವಿಧ ಇಲಾಖೆಗಳ ವಿವಿಧ ವರ್ಗದ ಹುದ್ದೆಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ಮತ್ತು ಕೆಲವೊಂದು ವರ್ಗದ ಹುದ್ದೆಗಳಿಗೆ ವಿಶೇಷ ಭತ್ಯೆ ಮಂಜೂರು ಮಾಡುವ ಕುರಿತು 6ನೇ ರಾಜ್ಯ ವೇತನ ಆಯೋಗದ ವರದಿಯ 2ನೇ |

| | | |
|---|---|---|
| | (ಮಾಹಿತಿ ನೀಡುವುದು) | ಸಂಪುಟದಲ್ಲಿನ ಶಿಫಾರಸ್ಸುಗಳನ್ನು ಪರಿಶೀಲಿಸಲು |
| ಈ) | ಯಾವ ಕಾಲಮಿತಿಯೊಳಗೆ 2ನೇ ಸಂಪುಟದ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗುವುದು? (ಮಾಹಿತಿ ನೀಡುವುದು) | ರಚಿಸಲಾಗಿದ್ದ ಅಧಿಕಾರಿ ಸಮಿತಿಯ ವರದಿಯು ಪ್ರಸ್ತುತ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. ವರದಿಯನ್ನು ವಿವರವಾಗಿ ಪರಿಶೀಲಿಸಿ ನಿಯಮಾನುಸಾರ ಕ್ರಮವಹಿಸಲಾಗುವುದು. |

ಆಇ 253 ಪಿಇಎನ್ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ